# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ : 777
2. ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ. ಎನ್.ರವಿಕುಮಾರ್
3. ಉತ್ತರಿಸುವ ಸಚಿವರು : ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು
4. ಉತ್ತರಿಸಬೇಕಾದ ದಿನಾಂಕ : 15-12-2020

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ತೋಟಗಾರಿಕೆ ಇಲಾಖೆಯಲ್ಲಿ ಎಷ್ಟು ತೋಟಗಾರಿಕಾ ಬೆಳೆಗಳಿಗೆ ಮಂಡಳಿಗಳನ್ನು ರಚಿಸಲಾಗಿದೆ. ಅವು ಯಾವುವು; | ತೋಟಗಾರಿಕೆ ಇಲಾಖೆಯಲ್ಲಿ ನಾಲ್ಕು ತೋಟಗಾರಿಕಾ ಬೆಳೆಗಳಿಗೆ ಮಂಡಳಿಗಳನ್ನು ರಚಿಸಲಾಗಿದೆ. ಅವುಗಳು ಯಾವುವೆಂದರೆ<br>1. ಕರ್ನಾಟಕ ರಾಜ್ಯ ಮಾವು ಅಭಿವೃದ್ಧಿ ಮತ್ತು ಮಾರುಕಟ್ಟೆ ನಿಗಮ ನಿಯಮಿತ<br>2. ಕರ್ನಾಟಕ ರಾಜ್ಯ ದ್ರಾಕ್ಷಾರಸ ಮಂಡಳಿ<br>3. ಕರ್ನಾಟಕ ರಾಜ್ಯ ಲಿಂಬೆ ಅಭಿವೃದ್ಧಿ ಮಂಡಳಿ<br>4. ಕರ್ನಾಟಕ ರಾಜ್ಯ ಸಾಂಬಾರು ಪದಾರ್ಥಗಳ ಅಭಿವೃದ್ಧಿ ಮಂಡಳಿ.<br>ಇವಲ್ಲದೆ ಎಲ್ಲಾ ರೀತಿಯ ತೋಟಗಾರಿಕೆ ಬೆಳೆಗಳ ವಹಿವಾಟು ನಡೆಸುವ ಜಿಲ್ಲಾಮಟ್ಟದ ಸಹಕಾರ ಸಂಘಗಳು ಹಾಗೂ ಬೆಂಗಳೂರು ಹಾಪ್ ಕಾಮ್ಸ್ ನ ಒಕ್ಕೂಟವನ್ನಾಗಿ ಕರ್ನಾಟಕ ರಾಜ್ಯ ಸಹಕಾರ ತೋಟಗಾರಿಕಾ ಮಹಾ ಮಂಡಳಿಯನ್ನಾಗಿ ಸ್ಥಾಪಿಸಲಾಗಿದೆ. |
| ಆ) | ಈ ತೋಟಗಾರಿಕಾ ಬೆಳೆಗಳಿಗೆ ರಚಿಸಲಾದ ಮಂಡಳಿಗಳಿಗೆ ಸರ್ಕಾರದಿಂದ ಕಳೆದ ಎರಡು ವರ್ಷಗಳಲ್ಲಿ ನೀಡಿದ ಅನುದಾನವೆಷ್ಟು (ಮಂಡಳಿವಾರು ವಿವರ ನೀಡುವುದು) | ಈ ತೋಟಗಾರಿಕಾ ಬೆಳೆಗಳಿಗೆ ರಚಿಸಲಾದ ಮಂಡಳಿಗಳಿಗೆ ಸರ್ಕಾರದಿಂದ ಕಳೆದ ಎರಡು ವರ್ಷಗಳಲ್ಲಿ ತಲಾ ರೂ.1000.00 ಲಕ್ಷಗಳ ಅನುದಾನವನ್ನು ನೀಡಿದ್ದು, ವಿವರಗಳು ಈ ಕೆಳಕಂಡಂತಿದೆ. |

| ಕ್ರ.ಸಂ | ಮಂಡಳಿ | ಅನುದಾನ (ರೂ,ಲಕ್ಷಗಳಲ್ಲಿ) | |
|---|---|---|---|
| | | 2018-19 | 2019-20 |
| 1 | ಕರ್ನಾಟಕ ರಾಜ್ಯ ಮಾವು ಅಭಿವೃದ್ಧಿ ಮತ್ತು ಮಾರುಕಟ್ಟೆ ನಿಗಮ ನಿಯಮಿತ | 150.00 | 200.00 |
| 2 | ಕರ್ನಾಟಕ ರಾಜ್ಯ ದ್ರಾಕ್ಷಾರಸ ಮಂಡಳಿ | 350.00 | 300.00 |
| 3 | ಕರ್ನಾಟಕ ರಾಜ್ಯ ಲಿಂಬೆ ಅಭಿವೃದ್ಧಿ ಮಂಡಳಿ | 100.00 | 100.00 |
| 4 | ಕರ್ನಾಟಕ ರಾಜ್ಯ ಸಾಂಬಾರು ಪದಾರ್ಥಗಳ ಅಭಿವೃದ್ಧಿ ಮಂಡಳಿ | 200.00 | 200.00 |
| 5 | ಕರ್ನಾಟಕ ರಾಜ್ಯ ಸಹಕಾರಿ ತೋಟಗಾರಿಕಾ ಮಾರಾಟ ಮಹಾ ಮಂಡಳ (ನಿ) | 200.00 | 200.00 |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಇ) | ಮಾವು ಮತ್ತು ಹಲಸಿನ ಕೃಷಿಕರಿಗೆ ಯಾವ ಯಾವ ಸೌಲಭ್ಯಗಳನ್ನು ನೀಡಲಾಗುತ್ತದೆ. | ಮಾವು ಮತ್ತು ಹಲಸಿನ ಕೃಷಿಕರಿಗೆ ಈ ಕೆಳಕಂಡಂತೆ ಸೌಲಭ್ಯಗಳನ್ನು ನೀಡಲಾಗಿದೆ.<br>ಕರ್ನಾಟಕ ರಾಜ್ಯ ಮಾವು ಅಭಿವೃದ್ಧಿ ಮತ್ತು ಮಾರುಕಟ್ಟೆ ನಿಗಮಕ್ಕೆ ಸಂಬಂಧಿಸಿದಂತೆ ಮಾವು ಕೃಷಿಕರಿಗೆ ಈ ಕೆಳಕಂಡಂತೆ ಸೌಲಭ್ಯಗಳನ್ನು |

ನೀಡಲಾಗುತ್ತಿದೆ.

1. ಕೊಯ್ಲು ಪೂರ್ವ ಮಾವು ಸೆಪ್ಟೆಲ್, ಪೀಲರ್ ಕಮ್ ಸೀಲರ್, ಪೆರಮೋನ್ ಟ್ರಾಪ್ಸ್ ಮತ್ತು ಹಣ್ಣಿನ ಕವಚ ಪರಿಕರಗಳಿಗೆ ಸಹಾಯಧನ ನೀಡಲಾಗುತ್ತಿದೆ.
2. ಕೊಯ್ಲೋತ್ತರ ಪರಿಕರಗಳಾದ ಕಾರ್ಟೂನ್ ಬಾಕ್ಸ್, ಪ್ಲಾಸ್ಟಿಕ್ ಕ್ರೇಟ್ಸ್, ಕಟಾವು ಸಲಕರಣೆ ಮತ್ತು ಸಪರುವಿಕೆ ಸಲಕರಣೆಗಳಿಗೆ ಸಹಾಯಧನ ನೀಡಲಾಗುತ್ತಿದೆ.
3. ವೈಜ್ಞಾನಿಕ ಮಾವು ಬೇಸಾಯ ಮತ್ತು ಸಸ್ಯ ಸಂರಕ್ಷಣಾ ಕ್ರಮಗಳ ಬಗ್ಗೆ ತಾಂತ್ರಿಕ ಮಾಹಿತಿ ಹಾಗೂ ಸಂಸ್ಕರಣೆ ಮತ್ತು ಮೌಲ್ಯವರ್ಧನೆ ಕುರಿತಂತೆ ವಸತಿ ಸಹಿತ/ವಸತಿ ರಹಿತ ತರಬೇತಿಗಳು, ಪ್ರಾತ್ಯಕ್ಷತೆ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತಿದೆ.
4. ನೇರ ಮಾರುಕಟ್ಟೆ ಉತ್ತೇಜನ ಕಾರ್ಯಕ್ರಮಗಳಾದ ರಾಜ್ಯ ಮತ್ತು ಜಿಲ್ಲಾ ಮಟ್ಟದ ಮಾವು ಮೇಳಗಳು, ಮಾಂಗ್ಗೋ ಪಿಕ್ಕಿಂಗ್ ಟೂರಿಸಂ, ಬಿ2ಸಿ ಪೋರ್ಟಲ್ ಮುಖಾಂತರ ಆನ್‌ಲೈನ್ ಮಾರುಕಟ್ಟೆ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತಿದೆ.
5. ಮಾವು ತಾಕುಗಳಲ್ಲಿ ಉತ್ತಮ ಕೃಷಿ ಪದ್ಧತಿಗಳ ಅಳವಡಿಕೆಗೆ ಗ್ಲೋಬಲ್ ಗ್ಯಾಪ್ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ.
6. ಮಾವು ಹೊಸತೋಟ ಸ್ಥಾಪನೆ, ಹಾಗೂ ಹಳೆ ತೋಟಗಳ ಪುನಶ್ಚೇತನ ಕಾರ್ಯಕ್ರಮಗಳಿಗೆ ಸಹಾಯಧನ ನೀಡಲಾಗುತ್ತಿದೆ
7. ಮಾವು ಸೇರಿದಂತೆ ಇತರೆ ತೋಟಗಾರಿಕೆ ಬೆಳೆಗಳಿಗೆ ತಗಲುವ ಕೀಟ ಮತ್ತು ರೋಗ ಸಸ್ಯ ಸಂರಕ್ಷಣಾ ಔಷಧಿಯನ್ನು ಬಳಸಲು ಸಹಾಯಧನ ನೀಡಲಾಗುತ್ತಿದೆ.
8. ಮಾವು ಮತ್ತು ಹಲಸು ಸೇರದಿಂತೆ ತೋಟಗಾರಿಕೆ ಬೆಳೆಗಳಿಗೆ ಹನಿ ನೀರಾವರಿ ಸೌಲಭ್ಯ ನೀಡಲಾಗುತ್ತಿದೆ.
9. ತೋಟಗಾರಿಕೆ ಇಲಾಖೆಯ ಕ್ಷೇತ್ರ ಮತ್ತು ನರ್ಸರಿಯಲ್ಲಿ ಉತ್ತಮ ಗುಣಮಟ್ಟದ ಮಾವು ಹಾಗೂ ಹಲಸಿನ ಸಸಿ ಕಸಿಯನ್ನು ಉತ್ಪಾದಿಸಿ ಯೋಗ್ಯ ದರದಲ್ಲಿ ಮಾರಾಟ ಮಾಡಲಾಗುತ್ತಿದೆ.

ಸಂ: HORTI/513/HGM/2020-admn-Horti-Sec

(ನಾರಾಯಣಗೌಡ)
ಪೌರಾಡಳಿತ, ತೋಟಗಾರಿಕೆ
ಮತ್ತು ರೇಷ್ಮೆ ಸಚಿವರು